**ಡಾ|| ಅ. ಸುಂದರ***

# ಹಿಂದೆ ವರದಿಯಾದ ಹಿರೆಜಂತಕಲ್ಲಿನ ಶಿಲಾಮೂರ್ತಿಗಳು ಬೌದ್ಧಶಿಲ್ಪಗಳೆ ?

ಹಿಂದಿನ ಹೈದರಾಬಾದ್ ಸಂಸ್ಥಾನದ ಪುರಾತತ್ವ ಇಲಾಖೆಯು ೧೯೩೦ರಲ್ಲಿ ಪ್ರಕಟಿಸಿದ ತನ್ನ ೧೯೨೭–೨೮ನೆಯ ವಾರ್ಷಿಕ ವರದಿಯಲ್ಲಿ ಲಿಯೊನಾರ್ಡ್‌ಮುನ್ ಅವರು ದಿನಾಂಕ ೨೭ ಸೆಪ್ಟೆಂಬರ್ ೧೯೨೮ರಂದು ರಾಯಚೂರು ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಹಿರೆ ಜಂತಕಲ್ಲಿನಲ್ಲಿ ಶೋಧಿಸಿದ ಒಂದು ಸಾಲಿನ ಎಂಟು ಚಿತ್ರಗಳ ಒಂದು ಶಿಲ್ಪ ಪಟ್ಟಿಕೆಯ ಬಗ್ಗೆ ರೇಖಾ ಚಿತ್ರ ಸಹಿತ ಅವರ ಟಿಪ್ಪಣಿಯನ್ನು ಪುಟ ೩೭ರಲ್ಲಿ ಪ್ರಕಟಿಸಿದೆ. ಈ ಶಿಲ್ಪಗಳು ಈ ಹಳ್ಳಿಯ ದಕ್ಷಿಣ ಬದಿಯಲ್ಲಿರುವ ಗುಡ್ಡದ ಮೇಲಿನ ಒಂದು ನೈಸರ್ಗಿಕ ಗವಿಯೊಳಗೆ ಒಂದು ಬಂಡೆಯ ಮೇಲೆ ಇವೆ. ಈ ಶಿಲ್ಪಗಳಲ್ಲಿ (ಎಡದಿಂದ ಬಲಕ್ಕೆ) ಮೊದಲನೆಯದು "ನಿಸ್ಸಂಶಯವಾಗಿ ಸರಳವಾಗಿ ಅಲಂಕೃತವಾದ ಒಂದು ಪೀಠದ ("ಚಬುತರ") ಮೇಲೆ ಅಡ್ಡಗಾಲು ಹಾಕಿ (ಪದ್ಮಾಸನದಲ್ಲಿ) ಕುಳಿತ ಬುದ್ಧ"ನೆಂದು, ಎರಡನೆಯದು ಧರಿಸಿದ ಕಿರೀಟ ಮತ್ತು ಪಕ್ಕದಲ್ಲಿರುವ ಗಿಡ್ಡ ವ್ಯಕ್ತಿಯನ್ನು ಗಮನಿಸಿ ಒಬ್ಬ ರಾಜನದೆಂದು, ಮೂರನೆಯದು ಒಬ್ಬ ದಿವಾನನೆಂದು, ನಾಲ್ಕನೆಯದು ಒಂದು ಸ್ತ್ರೀಯೆಂದು, ಐದನೆಯದು ಒಬ್ಬ ಸಾಧುವೆಂದು ಆರು ಮತ್ತು ಏಳನೆಯದು ಮತ್ತೊಬ್ಬ ರಾಜ ಮತ್ತು ಅವನ ಹೆಂಡತಿಯೆಂದು ಇವೆಲ್ಲ ಶಿಲ್ಪಗಳಿಗಿಂತ ದೊಡ್ಡದಾಗಿಯೂ ವಿಚಿತ್ರವಾಗಿಯೂ ಇರುವ ಎಂಟನೆಯದು ತಾನು ಒಂದೇ ಒಂದು ಸೂಚನೆ ಮಾಡುವುದಾದರೆ ಒಬ್ಬ ರಾಕ್ಷಸನೆಂದು ಮುನ್ ಅವರು ಗುರುತಿಸಿದ್ದಾರೆ. ಇವುಗಳ ಕೆಳಗಿರುವ ಹಳಗನ್ನಡದಲ್ಲಿಯ ಒಂದೆರಡು ಸಾಲಿನ ಶಾಸನಗಳನ್ನು "ಬುದ್ಧೈ ಪಿದಶಯ ನಮಃ ("ಓ ಬುದ್ಧ ದೇವನೆ ನಾವು ನಿನ್ನನ್ನು ಪೂಜಿಸುತ್ತೇವೆ"), ಎರಡನೇ ಸಾಲು "ನಗರವಿ ನಮಃ ವೀರ (ನಗರದ ಮುಖ್ಯಸ್ಥನು ಪ್ರಾರ್ಥಿಸುತ್ತಾನೆ" ಮತ್ತು ಆರನೆ ಚಿತ್ರದ ಕೆಳಗೆ "ರಂಗ ನಮಃ ಎಂದು ಓದಿದ್ದಾರೆ. ಇವಲ್ಲದೆ, ಇತರೆ ದೇವತೆಗಳ ತಲೆಗಳನ್ನು ಹಿಂಬದಿಯ ಬಂಡೆಯ ಮೇಲೆ ಬಿಡಿಸಲಾಗಿದ್ದು ಹೊರಗಿನ ಒಂದು ಬಂಡೆಯ ಮೇಲೆ ಹೆಚ್ಚಿನ ಶಾಸನಗಳು ಮತ್ತು ರೇಖಾ ಚಿತ್ರಗಳು ಇವೆ ಎಂದು ಹೇಳಿದ್ದಾರೆ.

೧೯೭೧–೭೨ರಲ್ಲಿ ಗಂಗಾವತಿ ತಾಲ್ಲೂಕಿನ ಎಲ್ಲ ಹಳ್ಳಿಗಳಲ್ಲಿಯ ಪುರಾತತ್ವ ಅವಶೇಷಗಳ ಶೋಧನ ಕಾರ್ಯವನ್ನು ನಡೆಸುತ್ತಿರುವಾಗ ಮುನ್ ಅವರ ವರದಿಯನ್ನು ಗಮನದಲ್ಲಿಟ್ಟುಕೊಂಡು ಹಿರೆ ಜಂತಕಲ್ಲನ್ನು ಪರಿಶೀಲಿಸಿದೆ. ಗುಡ್ಡದ ಬದಿಯಲ್ಲಿ ನೂತನ ಶಿಲಾಯುಗ (ಕ್ರಿ.ಪೂ. ೩೦೦೦–೮೦೦) ಮತ್ತು ಬೃಹತ್ ಶಿಲಾಯುಗ (ಸು. ಕ್ರಿ. ಪೂ. ೯೦೦–೩೦೦ ಸಂಸ್ಕೃತಿಗಳ ಅವಶೇಷಗಳ ಒಂದು ಪ್ರಾಚೀನ ನೆಲೆಯನ್ನು ಶೋಧಿಸಲಾಯಿತು.ಮತ್ತು ಗುಡ್ಡದ ಮೇಲೆ ಉಲ್ಲೇಖಿಸಿದ ಶಿಲ್ಪಗಳನ್ನು ಪರೀಕ್ಷಿಸಲಾಯಿತು.

ಮುನ್ ಅವರು ತಿಳಿಸಿದಂತೆ ಗವಿಯೊಳಗಿನ ಬಂಡೆಯಲ್ಲಿ ಕೆತ್ತಿದ ಒಂದು ಕಟ್ಟೆಯ ಮೇಲೆ ಒಂದು

---

* ಪ್ರಾಧ್ಯಾಪಕರು ಪ್ರಾಚೀನ ಭಾರತ ಇತಿಹಾಸ ಮತ್ತು ಶಾಸನ ವಿಜ್ಞಾನ ಅಧ್ಯಯನ ವಿಭಾಗ, ಕ.ವಿ.ವಿ. ಧಾರವಾಡ.

ಸಾಲಿನಲ್ಲಿ ಏಳು ವ್ಯಕ್ತಿಗಳ ಚಿತ್ರಗಳಿವೆ. ಈ ಸಾಲಿನ ಎಡಬದಿಯಲ್ಲಿ ಮತ್ತು ಉಳಿದ ಬದಿಗಳ ಬಂಡೆಗಳ ಮೇಲೂ ಮತ್ತು ಬಿಡಿಯಾಗಿ ದೇವ-ದೇವಿಯರ ಶಿಲ್ಪ-ಗಳಿವೆ. ವ್ಯಕ್ತಿಗಳ ಸಾಲಿನ ಕೆಳಗಿನ ವಿಜಯನಗರೋ-ತ್ತರ ಕಾಲದ ಕನ್ನಡ ಶಾಸನಗಳಿವೆ.

ಬುದ್ಧನೆಂದ ಗುರುತಿಸಲಾದ ಮೊದಲನೆಯದು ಸಿದ್ಧಾಸನದಲ್ಲಿ ಕುಳಿತ ಒಬ್ಬಯೋಗಿ. ಎಡ ಅಂಗೈಯಲ್ಲಿ ಪ್ರಾಯಶಃ ಶಿವಲಿಂಗವನ್ನಿಟ್ಟುಕೊಂಡು ಬಲಗೈಯಿಂದ ಅರ್ಚಿಸುತ್ತಿರುವಂತೆ ಕಾಣುತ್ತದೆ. ವೃತ್ತಾಕಾರವಾಗಿ ಎಳೆಗಳನ್ನು ಹೆಣೆದ ದಟ್ಟ ಜಟಾಮುಕುಟ, ಕರ್ಣಕುಂಡಲ ಎರಡೆಳೆಯ ರುದ್ರಾಕ್ಷಿಮಾಲೆ, ರುದ್ರಾಕ್ಷಿತೋಳ್ಬಂದಿ, ರುದ್ರಾಕ್ಷಿ ಕಡಗವನ್ನು ಧರಿಸಿದ್ದಾನೆ. ನೆಟ್ಟಗೆ ಮೊನೆಚಾದ ತುದಿಗಳನ್ನು ಮೇಲ್ಮುಖವಾಗಿ ನಿಲ್ಲಿಸಿದ ಕಠಾರಿಗಳ ಪೀಠದ ಮೇಲೆ ಯೋಗಿಯು ಕುಳಿತಿದ್ದಾನೆ. ಆದ್ದರಿಂದ ಈ ವ್ಯಕ್ತಿಯು ಒಬ್ಬ (ವೀರ?) ಶೈವ ಹಠಯೋಗಿಯೆಂದು ಗುರುತಿಸಬಹುದು.

ಈ ಯೋಗಿಯ ಎಡ ಬದಿಯಲ್ಲಿ ದರ್ಶನ ಮಾಡು-ತ್ತಿರುವ ಒಬ್ಬ ಗಣ್ಯ ಪುರುಷನು ಇವನ ಎಡ ಪಕ್ಕದಲ್ಲಿ ಬಹುಶಃ ಇವನ ಪತ್ನಿಯರಾದ ಇಬ್ಬರು ಸ್ತ್ರೀಯರು ಕೈಮುಗಿದುಕೊಂಡು ನಿಂತಿದ್ದಾರೆ. ಇವರ ವೇಷ ಭೂಷಣಗಳನ್ನು ನೋಡಿದಾಗ ಈ ಪ್ರದೇಶದ ಆಡಳಿ-ತಾಧಿಕಾರಿಯೆಂದು ಕಾಣುತ್ತದೆ. ಇವರ ತರುವಾಯ ಎಡ ಬದಿಗೆ ನಿಂತುಕೊಂಡಿರುವ ಕೇವಲ ಕೌಪೀನವುಳ್ಳ ಒಬ್ಬ ಗಡ್ಡ ಜಟಾಧಾರಿ, ಒಬ್ಬಯತಿಯು ಎಡ ಅಂಗೈಯ ಮೇಲೆ ಇಷ್ಟ ಲಿಂಗವನ್ನಿಟ್ಟುಕೊಂಡು ಬಲಗೈಯಿಂದ ಅರ್ಚಿಸುತ್ತಿದ್ದಾನೆ. ಇವನ ಎಡ ಬದಿಗೆ ಗಣ್ಯ ದಂಪತಿಗಳು ಕೈಮುಗಿದುಕೊಂಡು ನಿಂತಿದ್ದಾರೆ. ಇವರು ಮೊದಲಿನ ಗಣ್ಯ ವ್ಯಕ್ತಿಗಳನ್ನು ಹೋಲುತ್ತಾರೆ.

ಸಿದ್ಧಾಸನದಲ್ಲಿ ಕುಳಿತ ಯೋಗಿಯ ಕೆಳಗೆ ಒಂದು ಸಣ್ಣ ಕನ್ನಡ ಶಾಸನವಿದೆ. ಆದರೆ ಇದರಲ್ಲಿ ಹಲವಾರು ಅಕ್ಷರಗಳು ಸ್ಪಷ್ಟವಾಗಿಲ್ಲ ದೋಷಪೂರಿತ ಶಬ್ದಗಳಿವೆ. ಆದ್ದರಿಂದ ಈ ಶಾಸನದ ಸಂಪೂರ್ಣ ಪಾಠ ಸರಿಯಾಗಿ ತಿಳಿದಿಲ್ಲ. ಒಟ್ಟಿನಲ್ಲಿ ಮರುಬರೂಪುರದ ಸಿವ (ದ್ಧ) ಲಿಂಗ ಮತ್ತು (ಶಕವರ್ಷ) ೧೬೬೪ (=ಕ್ರಿ. ಶ.೧೭೪೨) ಎಂಬುದಷ್ಟು ತಿಳಿದಿದೆ. ಆದ್ದರಿಂದ ಕಠಾರಿ ಪೀಠದ ಮೇಲೆ ಕುಳಿತ ಯೋಗಿಯು ೧೮ನೇ ಶತಮಾನದ ಉತ್ತರಾರ್ಧದಲ್ಲಿ ಈ ಭಾಗದಲ್ಲಿದ್ದ ಸಿದ್ಧಲಿಂಗ ಯೋಗಿಗಳೆಂದು ನಿಸ್ಸಂದೇಹವಾಗಿ ಗುರುತಿಸಬಹುದು. ಉಳಿದ ಚಿತ್ರಗಳ ಕೆಳಗೂ ಅವರವರ ಹೆಸರುಗಳಿವೆ. ಸಿದ್ಧಲಿಂಗ ಯೋಗಿಯು ಎಡಬದಿಗಿರುವ ಗಣ್ಯವ್ಯಕ್ತಿಯು ಹೆಸರು ಬಹುಶಃ "ಬದ್ದೆಯ್ಯ" ಅವನ ಪತ್ನಿಯರಲ್ಲಿ ಒಬ್ಬಳಲ್ಲಿ ನಾಗಂಮ ಜನೆಯ ಯತಿಯ ಚಿತ್ರ ವು"ಸಂಕರದೇವರು" ಮತ್ತೊಬ್ಬ ಗಣ್ಯವ್ಯಕ್ತಿಯು "ನಗಪ್ರಿಯಣ"(?)

ಒಟ್ಟಿನಲ್ಲಿ ಇವುಗಳು ಚೌದ್ದ ಶಿಲ್ಪಿಗಳಾಗಿರದೆ ೧೮ ನೇ ಶತಮಾನದ ಉತ್ತರಾರ್ಧ ವೀರಶೈವ ಯತಿಗಳ ಮತ್ತು ಅವರ ಭಕ್ತರ ಚಿತ್ರಗಳಾಗಿವೆ.

ಇನ್ನು ರಾಕ್ಷಸನೆಂದು ಗುರುತಿಸಿದ ೮ನೇ ಯ ಚಿತ್ರವು ಚತುರ್ಭುಜೆ ಮಹಿಷಾಸುರ ಮರ್ದಿನಿಯು| ವಿರಭದ್ರನ ಮೂರ್ತಿ, ಮೂರು ಕಾಲುಗಳುಳ್ಳ ಒಬ್ಬ ವಿಚಿತ್ರ ಪುರುಷ, ಮತ್ತೊಂದು ಬದಿಯಲ್ಲಿ ದ್ವಿಮುಖ ನವಿಲು ವಾಹನ ಅಷ್ಟಭುಜ ದೇವತೆ (ಕಾರ್ತಿಕೇಯ?) ಅಷ್ಟಭುಜ ವೀರಭದ್ರ ಮೊದಲಾದ ದೇವರ ಶಿಲ್ಪಗಳಿವೆ. ಗವಿಯ ಹೊರಗೆ ಮುಂದೆ, ವೀರಭದ್ರನ ಗುಡಿಯಿತ್ತು.

ಮತ್ತೊಂದು ಬದಿಯಲ್ಲಿ ಹೊರಗೆ ಬಯಲು ಬಂಡೆಯ ಬಂಡೆಯ ಮೇಲೆ ಮನ್ ಅವರು ಗ್ರಾಫಿಟಿ ಹೇಳಿದ ಒಂದು ಅತ್ಯಂತ ಅಪರೂಪದ ದೇವತೆಯ ರೇಖಾ ಚಿತ್ರವಿದೆ. ಶಂಖ, ಚಕ್ರ, ಗದೆ, ಖಡ್ಗ, ಕಠಾರಿ ಮೊದಲಾದ ವಿವಿಧ ಆಯುಧಗಳನ್ನು ಧರಿಸಿದ ಈ ದೇವತೆಯು ತ್ರಿಮುಖ, ಮತ್ತು ಇಪ್ಪತ್ತು ಭುಜ-ಗಳುಳ್ಳವನಾಗಿದ್ದಾನೆ. ಬಲ ಬದಿಯ ಮುಖ ವರಾಹ, ಮುಂಬದಿಯದು ಸಿಂಹ ಮುಖ, ಎಡಬದಿಯದು ಗರುಡ ಮುಖ. ಆರು ಕಣ್ಣುಗಳು ಮುಂದಿನ ಮುಖದ ಎರಡು ಕಣ್ಣುಗಳಲ್ಲಿ ಬಲಬದಿಯದು ವರಾಹ ಮುಖದ ಕಣ್ಣುಗಳಲ್ಲೊಂದಾಗಿದೆ. ಹೀಗೆಯೆ ಎಡಗಡೆಯದು. ಸೊಂಟ-ದಿಂದ ಕೆಳಭಾಗವೆ ಎದುರು ಬದುರು ಬಾಲವನ್ನೆತ್ತಿಕೊಂಡು ನಿಂತಿರುವ ಎರಡು ಸಿಂಹಗಳು. ಇವುಗಳ ತಲೆಗಳ ಭಾಗದಿಂದ ಮೇಲೆ ದೇವತೆ ಭಾಗ. ಕಿರಿಟ, ಹಾರ ನೊದಲಾದ ಕೆಲವೇ ಆಭರಣಗಳಿಂದ ಅಲಂಕೃತನಾಗಿದ್ದಾನೆ. ಬಹುಶಃ ಮಧ್ವ ಸಂಪ್ರದಾಯದ

ಪ್ರಕಾರ ಈ ರೇಖಾ ಚಿತ್ರವು ಸಂಕರ್ಷಣ ಮತ್ತು ಜಯಾ ಇವರಿಂದ ಉಂಟಾದ ಪಂಚಮುಖಿ ಮುಖ್ಯ ಪ್ರಾಣ ದೇವರೆಂದು ಗುರುತಿಸಬಹುದು. ಈ ದೇವರ ಎಡಬದಿಗೆ ಪಗಡಿ ಧರಿಸಿದ ಕೈ ಮುಗಿದು ನಿಂತುಕೊಂಡ ಒಬ್ಬ ಭಕ್ತನ ಚಿತ್ರವಿದೆ.

ಮಂತ್ರಾಲಯದ ಹತ್ತಿರ ಘಾಣಧಾಳದ ಪಂಚ ಮುಖಿ ಮುಖ್ಯ ಪ್ರಾಣ ದೇವರು ಪ್ರಸಿದ್ಧ. ಇದರೊಡನೆ ಹೋಲಿಸಿದಾಗ ಈ ರೇಖಾಚಿತ್ರವು ಬಹುಶಃ ಪಂಚ ಮುಖಿ ಮುಖ್ಯ ಪ್ರಾಣ ದೇವರೆಂದು ಗುರುತಿಸಬಹುದು. ಆದರೂ ಭುಜಗಳ ಬಾಹುಳ್ಯ ದೇಹದ ಕೆಳಭಾಗವು ಎರಡು ಸಿಂಹಗಳು ಈ ಚಿತ್ರದ ವೈಶಿಷ್ಟ್ಯ ಒಟ್ಟಿನಲ್ಲಿ ಇದೊಂದು ಅನುಪಮ ರೇಖಾ ಚಿತ್ರ.

ಈ ರೇಖಾಚಿತ್ರ ಸಮೀಪದ ಬಂಡೆಗಳ ಮೇಲೆ ಶಾಸದ ಸಹಿತ ಜೈನ ತೀರ್ಥಂಕರ ಮತ್ತು ನಿಷಿಧಿಗಳ ಪೂರ್ಣ ಚಿತ್ರಗಳಿವೆ.

ಹೀಗೆ ಒಂದೆಡೆಯಲ್ಲಿಯ ಜೈನ, ಮಧ್ವ ಮತ್ತು ವೀರಶೈವ ಮತಗಳಿಗೆ ಸಂಬಂಧಿಸಿದ ಶಿಲ್ಪಗಳಿಂದ ಕೂಡಿದ ಈ ಸ್ಥಳವು ಮಹತ್ವದ್ದಾಗಿದೆ.